ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರುವರಿ, 2021

ಸಹಕಾರ ಲೆಕ್ಕಪರಿಶೋಧನ ಕಾರ್ಯವಿಧಾನ ಬಗ್ಗೆ

ಶ್ರೀಮತಿಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು) :-

169(225) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸಹಕಾರ ಲೆಕ್ಕಪರಿಶೋಧನಾ ಇಲಾಖೆಯಿಂದ ಸರ್ಕಾರಕ್ಕೆ ವಾರ್ಷಿಕವಾಗಿ ಸಿಗುತ್ತಿರುವ ಆರ್ಥಿಕ ಹೊರೆ ಎಷ್ಟು ;

(ಆ) ವೈದ್ಯನಾಥನ್ ಸಮಿತಿ ವರದಿ ಜಾರಿ ಮುನ್ನ ಸರ್ಕಾರಿ ಇಲಾಖೆಯಿಂದ ಸಂಗ್ರಹವಾಗುತ್ತಿದ್ದ ಆಡಿಟ್ ಶುಲ್ಕ ಎಷ್ಟು ; (ವರ್ಷವಾರು ವಿವರ ಒದಗಿಸುವುದು)

(ಇ) ಪ್ರಸ್ತುತವಾಗಿ ಸಹಕಾರ ಲೆಕ್ಕ ಪರಿಶೋಧನಾ ಇಲಾಖೆ ನಿರ್ವಹಿಸುತ್ತಿರುವ ಕಾರ್ಯಗಳಿಗೆ ಹೋಲಿಸಿದ್ದಲ್ಲಿ ಇರುವ ಸಿಬ್ಬಂದಿಗಳ ಸಂಖ್ಯೆ ಅತೀ ಹೆಚ್ಚಾಗಿಲ್ಲವೇ ;

(ಈ) ಈ ಬಗ್ಗೆ ಶ್ರೀನಿವಾಸಮೂರ್ತಿಯವರ ಅಧ್ಯಕ್ಷತೆಯಲ್ಲಿ ರಚಿಸಲಾಗಿದ್ದ ಆಡಳಿತಾತ್ಮಕ ಸುಧಾರಣಾ ಆಯೋಗ ನೀಡಿರುವ ಶಿಫಾರಸ್ಸನ್ನು ಕೂಡಲೇ ಜಾರಿಗೆ ತರಲು ಸರ್ಕಾರದಿಂದ ವಿಳಂಬವಾಗುತ್ತಿರಲು ಕಾರಣವೇನು; ಈ ಬಗ್ಗೆ ತುರ್ತಾಗಿ ಸರ್ಕಾರ ನಿರ್ಧಾರ ಕೈಗೊಂಡು ಸಿಬ್ಬಂದಿಗಳನ್ನು ಲೆಕ್ಕ ಇಲಾಖೆಗೆ ನೀಡಲು ಸರ್ಕಾರ ಅನುಸರಿಸುವ ವಿಧಿವಿಧಾನಗಳೇನು?